

**ಕರ್ನಾಟಕ ವಿಧಾನ ಪರಿಷತ್ತು**

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 570 (849) |
| ಸದಸ್ಯರ ಹೆಸರು | : | ಶ್ರೀ ಅರುಣ ಶಹಾಪುರ |
| ಉತ್ತರಿಸುವ ದಿನಾಂಕ | : | 11.03.2020 |
| ಉತ್ತರಿಸುವ ಸಚಿವರು | : | ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಮತ್ತು ಸಮಾಜ ಕಲ್ಯಾಣ ಸಚಿವರು |

| ಕ್ರ. ಸಂ | ವಿಷಯ | ಉತ್ತರ |
|---|---|---|
| ಅ) | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಯ ಶಿಕ್ಷಕರು/ಸಿಬ್ಬಂದಿಗಳಿಗೆ ಸಾರ್ವಜನಿಕ ಶಿಕ್ಷಣ ಇಲಾಖೆಯ ಶಿಕ್ಷಕರಿಗೆ ಕುಮಾರ್ ನಾಯಕ್ ವರದಿ ಅನ್ವಯ ನೀಡಿದ ಒಂದು ವಿಶೇಷ ವೇತನ ಬಡ್ತಿಯನ್ನು ನೀಡುವ ಕಾರ್ಯ ಯಾವ ಹಂತದಲ್ಲಿದೆ; | ಕರ್ನಾಟಕ ರಾಜ್ಯದಲ್ಲಿನ ಬೋಧಕ ಸಿಬ್ಬಂದಿಗಳಿಗೆ ಹೊರ ರಾಜ್ಯದಲ್ಲಿನ ಬೋಧಕ ಸಿಬ್ಬಂದಿಗಳಿಗೆ ನೀಡುವ ವೇತನಕ್ಕಿಂತ ಕಡಿಮೆ ನೀಡಲಾಗುತ್ತಿತ್ತು. ರಾಜ್ಯದ ಬೋಧಕ ಸಿಬ್ಬಂದಿಗಳಿಗೆ ವೇತನ ಮತ್ತು ಇತರೆ ಭತ್ಯೆಗಳನ್ನು ನೀಡುವುದಕ್ಕೆ ಸಂಬಂಧಿಸಿದಂತೆ ಶ್ರೀ ಕುಮಾರ ನಾಯಕ್ ಸಮಿತಿಯನ್ನು ನೇಮಿಸಲಾಗಿತ್ತು. ಆದರೆ, ಈ ಸಮಿತಿಯ ವರದಿ ಸ್ವೀಕೃತವಾಗುವುದರೊಳಗಾಗಿ ಅಂದರೆ 2012 ರಲ್ಲಿ ಪರಿಷ್ಕೃತ ವೇತನ ಶ್ರೇಣಿ ಜಾರಿಗೆ ಬಂದಿತ್ತು. ಈ ಪರಿಷ್ಕೃತ ವೇತನ ಶ್ರೇಣಿಯಲ್ಲಿ ಬೇರೆ ರಾಜ್ಯದ ಬೋಧಕ ಸಿಬ್ಬಂದಿಗಳಿಂತ ಹೆಚ್ಚಿನ ವೇತನ ನಿಗಧಿಪಡಿಸಿರುವುದರಿಂದ, ಶ್ರೀ ಕುಮಾರ ನಾಯಕ್ ಸಮಿತಿ ವರದಿಯಲ್ಲಿನ ಒಂದು ವಿಶೇಷ ವೇತನ ಬಡ್ತಿ ನೀಡುವ ಅಗತ್ಯತೆ ಇರುವುದಿಲ್ಲವೆಂದು ಆರ್ಥಿಕ ಇಲಾಖೆಯು ಪ್ರಸ್ತಾವನೆಯನ್ನು ತಿರಸ್ಕರಿಸಿದೆ.<br>ವಸತಿ ಶಾಲೆ ಶಿಕ್ಷಕರುಗಳ ಕರ್ತವ್ಯಗಳು ಮತ್ತು ಶಿಕ್ಷಣ ಇಲಾಖೆಯ ಶಿಕ್ಷಕರುಗಳ ಕರ್ತವ್ಯಗಳನ್ನು ಪರಸ್ಪರ ಹೋಲಿಸಲು ಬರುವುದಿಲ್ಲ. ಎರಡೂ ವೃಂದಗಳ ವೃಂದ ಮತ್ತು ನೇಮಕಾತಿ ನಿಯಮಗಳು ಬೇರೆ ಬೇರೆಯಾಗಿದ್ದು, ಒಂದರ ನಿಯಮವನ್ನು ಮತ್ತೊಂದಕ್ಕೆ ಹೋಲಿಸಿ ಅನ್ವಯಿಸಲು ನಿಯಮಗಳಲ್ಲಿ ಅವಕಾಶವಿರುವುದಿಲ್ಲ ಎಂಬ ಕಾರಣಗಳನ್ನು ನೀಡಿ ಆರ್ಥಿಕ ಇಲಾಖೆಯು ಪ್ರಸ್ತಾವನೆಯನ್ನು ತಿರಸ್ಕರಿಸಿದೆ. |
| ಆ) | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಯ ಶಿಕ್ಷಕರ/ಸಿಬ್ಬಂದಿಗಳಿಗೆ ಒಂದು ವಿಶೇಷ ವೇತನ ಬಡ್ತಿಯನ್ನು ನೀಡುವ ಬಗ್ಗೆ ಸರ್ಕಾರದ ಸ್ಪಷ್ಟ ನಿಲುವೇನು; ಯಾವ ಕಾರಣಕ್ಕಾಗಿ ಈ ಕಾರ್ಯ ವಿಳಂಬವಾಗಿದೆ; ಇರುವ ಅಡೆತಡೆಗಳೇನು; | |
| ಇ) | ಯಾವ ಕಾಲಮಿತಿಯೊಳಗೆ ಈ ನೌಕರರಿಗೆ ಈ ಸೌಲಭ್ಯವನ್ನು ಒದಗಿಸಲಾಗುವುದು; (ಸ್ಪಷ್ಟ ನಿಲುವಿನೊಂದಿಗೆ ವಿವರವನ್ನು ಒದಗಿಸುವುದು) | |
| ಈ) | ಶಿಕ್ಷಣ ಇಲಾಖೆಯ ಶಿಕ್ಷಕರಿಗೂ ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಯಡಿ ಕಾರ್ಯ ನಿರ್ವಹಿಸುತ್ತಿರುವ ಶಿಕ್ಷಕರ ಸೇವಾ ಸೌಲಭ್ಯಗಳು ಬೇರೆ ಬೇರೆ ಇವೆಯೇ: ಇದ್ದಲ್ಲಿ ಅವುಗಳ ವಿವರವನ್ನು ಸಂಪೂರ್ಣ ವಿವರದೊಂದಿಗೆ ಒದಗಿಸುವುದು? | ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಯಡಿ ಕಾರ್ಯ ನಿರ್ವಹಿಸುತ್ತಿರುವ ಶಿಕ್ಷಕರ ಸೇವಾ ಸೌಲಭ್ಯಗಳ ಸರ್ಕಾರಿ ಶಾಲೆಗಳಲ್ಲಿರುವ ಬೋಧಕ/ಬೋಧಕೇತರ ಸಿಬ್ಬಂದಿಗಳಿಗೆ ನೀಡಲಾಗುತ್ತಿರುವ ಕೆ.ಜಿ.ಐ.ಡಿ. ಒಂದು ವಿಶೇಷ ವೇತನ ಬಡ್ತಿ ಮತ್ತು ದಿನಾಂಕ:01.04.2018 ರಿಂದ ಜಾರಿಗೆ ಬರುವಂತೆ ಮಂಜೂರಾದ ನಿವೃತ್ತಿ ಮತ್ತು ಮರಣ ಉಪದಾನ ಹೊರತುಪಡಿಸಿ ಶಿಕ್ಷಣ ಇಲಾಖೆ ಶಿಕ್ಷಕರುಗಳಿಗೆ ನೀಡುತ್ತಿರುವ ಎಲ್ಲಾ ಸವಲತ್ತುಗಳನ್ನು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘದ ಖಾಯಂ ಶಿಕ್ಷಕರುಗಳಿಗೆ ನೀಡಲಾಗುತ್ತಿದೆ.<br>ಮುಂದುವರೆದು ನೂತನ ಪಿಂಚಣಿ ಯೋಜನೆಯನ್ನು ಸಹ ಶಿಕ್ಷಕರಗಳು ಸೇವೆಗೆ ಸೇರಿದ ದಿನಾಂಕದಿಂದ ವಿಸ್ತರಿಸಲಾಗಿದೆ. |

ಸಕಇ 90 ಮೊದೇಶಾ 2020

**(ಗೋವಿಂದ ಎಂ. ಕಾರಜೋಳ)**
ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ
ಮತ್ತು ಸಮಾಜ ಕಲ್ಯಾಣ ಸಚಿವರು